## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 968

ಸದಸ್ಯರ ಹೆಸರು : ಶ್ರೀ ಯು.ಬಿ.ವೆಂಕಟೇಶ್

(ನಾಮ ನಿರ್ದೇಶನ ಹೊಂದಿದವರು)

ಉತ್ತರಿಸಬೇಕಾದ ದಿನಾಂಕ : 15.03.2021

ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿರುವ ಸರ್ಕಾರಿ ಶಾಲೆಗಳ ಸಂಖ್ಯೆ ಎಷ್ಟು; (ಜಿಲ್ಲಾವಾರು ಮಾಹಿತಿ ಒದಿಸುವುದು) | ರಾಜ್ಯದಲ್ಲಿ ಒಟ್ಟು 47977 ಸರ್ಕಾರಿ ಶಾಲೆಗಳಿದ್ದು (ಜಿಲ್ಲಾವಾರು ಮತ್ತು ತಾಲ್ಲೂಕುವಾರು ಮಾಹಿತಿ ಅನುಬಂಧ-1ರಲ್ಲಿ ಒದಗಿಸಿದೆ)<br>LPS: 20751; HPS: 22499; HS: 4727; Total: 47977 |
| ಆ) | ಸರ್ಕಾರಿ ಶಾಲೆಗಳಿಗೆ ಮೂಲಭೂತ ಸೌಲಭ್ಯಗಳನ್ನು ಒದಗಿಸುವ ನಿಟ್ಟಿನಲ್ಲಿ ಸರ್ಕಾರವು ಕೈಗೊಂಡಿರುವ ಕ್ರಮಗಳೇನು? | 2016-17 ನೇ ಸಾಲಿನಿಂದ 2018-19ನೇ ಸಾಲಿನವರೆಗೆ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆಯ ಶಾಲಾ ಕೊಠಡಿಗಳ ನಿರ್ವಹಣೆಗಾಗಿ ಈ ಕೆಳಕಂಡಂತೆ ಅನುದಾನ ಒದಗಿಸಲಾಗಿರುತ್ತದೆ. |

| LPS | HPS | HS | Total |
|---|---|---|---|
| 20751 | 22499 | 4727 | 47977 |

ರೂ.ಲಕ್ಷಗಳಲ್ಲಿ

| ಕ್ರ ಸಂ | ಕಾರ್ಯಕ್ರಮದ ವಿವರ | 2016-17 | 2017-18 | 2018-19 |
|---|---|---|---|---|
| 1 | ಪ್ರಾಥಮಿಕ ಶಾಲಾ ಕೊಠಡಿಗಳ ನಿರ್ವಹಣೆ | 1481.00 | 1541.00 | 1603.00 |
| 2 | ಪಂಚ ಸೌಲಭ್ಯ ಶಾಲಾ ಸೌಲಭ್ಯಗಳ ನಿರ್ವಹಣೆ | 1800.00 | 4000.00 | 2500.00 |
| 3 | ಪ್ರೌಢ ಶಾಲಾ ಕಟ್ಟಡಗಳ ನಿರ್ವಹಣೆ | 2400.00 | 3000.00 | 3500.00 |
| 4 | ಪ್ರಾಥಮಿಕ ಶಾಲಾ ಕಟ್ಟಡಗಳ ನಿರ್ಮಾಣ | 1000.00 | 2500.00 | 6000.00 |
| 5 | ಪ್ರೌಢ ಶಾಲಾ | 14028.00 | 20600.00 | 23477.00 |

| | | | | |
|---|---|---|---|---|
| | ಕಟ್ಟಡಗಳ ನಿರ್ಮಾಣ | | | |
| | ಒಟ್ಟು | 20709.00 | 31641.00 | 37080.00 |

2019-20ರಿಂದ ಸರ್ಕಾರಿ ಶಾಲೆಗಳ ನಿರ್ವಹಣೆಗಾಗಿ ಹೆಚ್ಚಿನ ಅನುದಾನ ಪಡೆದು ಅನೇಕ ಪ್ರಯತ್ನಗಳನ್ನು ನಡೆಸಲಾಗುತ್ತಿದ್ದು ಈ ಕೆಳಕಂಡಂತೆ ಅನುದಾನ ಬಿಡುಗಡೆ ಮಾಡಲಾಗಿದೆ.

ರೂ.ಲಕ್ಷಗಳಲ್ಲಿ

| ಕ್ರಸಂ | ಕಾರ್ಯಕ್ರಮದ ವಿವರ | 2019-20 | 2020-21 |
|---|---|---|---|
| 1 | ಕೊಠಡಿಗಳ ದುರಸ್ಥಿಗಾಗಿ | 5103.00 | 0.00 |
| 2 | ಶಾಲಾ ಕೊಠಡಿಗಳ ನಿರ್ಮಾಣಕ್ಕಾಗಿ | 39409.50 | 19210.00 |
| 3 | ಶಾಲೆಗಳ ನಿರ್ವಹಣೆಗಾಗಿ | 2500.00 | 3000.00 |
| 4 | ಇಲಾಖಾ ಅನುದಾನದ ಜೊತೆ ಮಹಾತ್ಮ ಗಾಂಧಿ NAREGA ಅನುದಾನವನ್ನು ಒಗ್ಗೂಡಿಸುವ ಮೂಲಕ | 0.00 | 2921.00 |
| 5 | RIDF-25 ಯೋಜನೆಯಡಿ ಕೊಠಡಿಗಳ ಮರು ನಿರ್ಮಾಣ | 0.00 | 35000.00 |
| 6 | ಕರ್ನಾಟಕ ಪಬ್ಲಿಕ್ ಶಾಲೆಗಳಿಗೆ ಮೂಲಭೂತ ಸೌಲಭ್ಯ ಒದಗಿಸಲು | 0.00 | 10000.00 |
| 7 | 2019-20 ಮಳೆ ಹಾನಿ ದುರಸ್ಥಿ | 19951.75 | 0.00 |
| 8 | 2020-21ನೇ ಸಾಲಿನ ಮಳೆ ಹಾನಿ ದುರಸ್ಥಿ | 0.00 | 7557.99 |

| | | | |
|---|---|---|---|
| | ಒಟ್ಟು | 66964.3 | 77688.99 |

2019-20ನೇ ಸಾಲಿನಲ್ಲಿ ಪ್ರಥಮ ಬಾರಿಗೆ ರಾಜ್ಯ ಪ್ರಕೃತಿ ವಿಪತ್ತು ನಿರ್ವಹಣೆಯಡಿಯಲ್ಲಿ 6,196 ಶಾಲೆಗಳಲ್ಲಿ 13,260 ಕೊಠಡಿಗಳ ದುರಸ್ತಿಗಾಗಿ ರೂ 19951.75 ಲಕ್ಷಗಳ ಅನುದಾನ ಪಡೆಯಲಾಗಿದೆ.

2020-21ನೇ ಸಾಲಿನಲ್ಲಿ ರಾಜ್ಯ ಪ್ರಕೃತಿ ವಿಪತ್ತು ನಿರ್ವಹಣೆಯಡಿಯಲ್ಲಿ ಶಾಲೆಗಳ ದುರಸ್ಥಿಗಾಗಿ ರೂ.7557.99 ಲಕ್ಷಗಳ ಅನುದಾನ ಪಡೆಯಲಾಗಿರುತ್ತದೆ.

ಮಾನ್ಯ ಉಚ್ಚ ನ್ಯಾಯಾಲಯದ ಆದೇಶಾನುಸಾರ ಹಾಗೂ ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರದ (KSLSA)ರ ವರದಿಯನ್ವಯ ಸರ್ಕಾರಿ ಶಾಲೆಗಳಿಗೆ ಮೂಲಭೂತ ಸೌಕರ್ಯ ಒದಗಿಸಲು ಒಟ್ಟು 31 ಜಿಲ್ಲೆಗಳ 632 ಶಾಲೆಗಳಿಗೆ ರೂ.8084.95 ಲಕ್ಷಗಳ ಹೆಚ್ಚುವರಿ ಅನುದಾನ ಒದಗಿಸಲಾಗಿದೆ.

2020-21ನೇ ಸಾಲಿನಲ್ಲಿ ಕೆ.ಪಿ.ಎಸ್ ಶಾಲೆಗಳ ಮೂಲಭೂತ ಸೌಕರ್ಯಗಳಿಗಾಗಿ ರೂ.10000.0 ಲಕ್ಷಗಳನ್ನು ಒದಗಿಸಲಾಗಿದೆ.

ಸ್ವಚ್ಛ ಭಾರತ್ ಯೋಜನೆಯಡಿ 22-21ನೇ ಸಾಲಿನಲ್ಲಿ 670 ಶೌಚಾಲಯಗಳ ನಿರ್ಮಾಣವನ್ನು ಕೈಗೆತ್ತಿಕೊಂಡಿದ್ದು, 662 ಕಾಮಗಾರಿಗಳು ಪೂರ್ಣಗೊಂಡಿದ್ದು, ಉಳಿದ 8 ಕಾಮಗಾರಿಗಳು ಪ್ರಗತಿಯಲ್ಲಿರುತ್ತದೆ.

ಗ್ರಾಮೀಣ ನೀರು ಸರಬರಾಜು ಮತ್ತು ನೈರ್ಮಲ್ಯ ಇಲಾಖೆ ವತಿಯಿಂದ ಜಲಜೀವನ್ ಮಿಷನ್ ಯೋಜನೆಯಡಿಯಲ್ಲಿ ಸರ್ಕಾರಿ ಗ್ರಾಮೀಣ ಶಾಲೆಗಳ 1633 ಶೌಚಾಲಯಗಳಿಗೆ ಮತ್ತು 288 ಅಡಿಗೆ ಕೋಣೆಗಳಿಗೆ ನೀರಿನ ಸಂಪರ್ಕ ಕಲ್ಪಿಸಲು ಕಾರ್ಯಕ್ರಮ ಕೈಗೆತ್ತಿಕೊಳ್ಳಲಾಗಿದೆ

2020-21ನೇ ಸಾಲಿನಿಂದ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯಡಿಯಲ್ಲಿ ಪ್ರತಿ ಶಾಸಕರು, ಕನಿಷ್ಟ 3 ಸರ್ಕಾರಿ ಶಾಲೆಗಳನ್ನು ದತ್ತು ಪಡೆದುಕೊಂಡು ಅಭಿವೃದ್ಧಿ ಪಡಿಸಲು ಕಾರ್ಯಕ್ರಮ ಕೈಗೆತ್ತಿಕೊಳ್ಳಲಾಗಿದೆ.

ಪ್ರಸ್ತುತ, 224 ವಿಧಾನಸಭಾ ಕ್ಷೇತ್ರಗಳ ಪೈಕಿ 19 ವಿಧಾನಸಭಾ ಕ್ಷೇತ್ರಗಳನ್ನು ಹೊರತುಪಡಿಸಿ 205 ಕ್ಷೇತ್ರಗಳ ಶಾಸಕರು 673 ಸರ್ಕಾರಿ ಶಾಲೆಗಳನ್ನು ದತ್ತು ಪಡೆದಿದ್ದು, ಅಭಿವೃದ್ಧಿ ಪಡಿಸಲು ಕ್ರಮ ಕೈಗೊಳ್ಳಲಾಗುತ್ತಿದೆ ಮತ್ತು ವಿವಿಧ ವಿಶ್ವ ವಿದ್ಯಾನಿಲಯಗಳು 282 ಶಾಲೆಗಳನ್ನು ದತ್ತು ತೆಗೆದುಕೊಂಡಿದ್ದು, ಅಭಿವೃದ್ಧಿ ಕಾರ್ಯ ಪ್ರಗತಿಯಲ್ಲಿದೆ.

2020–21ನೇ ಸಾಲಿನಲ್ಲಿ, ಸರ್ಕಾರಿ ಶಾಲೆಗಳ ಸಮಗ್ರ ಅಭಿವೃದ್ಧಿಗಾಗಿ ದಾನಿಗಳಿಂದ, ಹಳೆ ವಿದ್ಯಾರ್ಥಿಗಳಿಂದ, ಖಾಸಗಿ ಸಂಘ ಸಂಸ್ಥೆಗಳಿಂದ ಉದ್ಯಮ ಹಾಗೂ ಸಮುದಾಯದಿಂದ ದೇಣಿಗೆ ಕೊಡುಗೆಗಳನ್ನು ಪಡೆಯಲು ನಮ್ಮ ಶಾಲೆ ನನ್ನ ಕೊಡುಗೆ ಎಂಬ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲಾಗಿದೆ.

2019–20, 2020–21ನೇ ಸಾಲಿನಲ್ಲಿ ಅವಶ್ಯವಿರುವೆಡೆ ರಾಜ್ಯಬಂಡವಾಳ ವೆಚ್ಚದಡಿ ಈ ಕೆಳಕಂಡಂತೆ ಹೊಸ ಶಾಲಾ ಕೊಠಡಿಗಳ ಮರುನಿರ್ಮಾಣವನ್ನು ಕೈಗೆತ್ತಿಕೊಳ್ಳಲಾಗಿದೆ.

ರೂ.ಲಕ್ಷಗಳಲ್ಲಿ

| ಕ್ರಮ ಸಂಖ್ಯೆ | ವರ್ಷ | ಕಾರ್ಯಕ್ರಮದ ವಿವರ | ಶಾಲೆಗಳ ಸಂಖ್ಯೆ | ಕೊಠಡಿಗಳ ಸಂಖ್ಯೆ | ಅನುದಾನ |
|---|---|---|---|---|---|
| 1) | **2019–20** | ರಾಜ್ಯ ಬಂಡವಾಳ ವೆಚ್ಚ | 632 | 973 | 21982.67 |
| | | ಆರ್.ಐ.ಡಿ.ಎಫ್ | 3386 | 6469 | 75807.30 |
| | | 03 ವರ್ಷಗಳ ವಿಶೇಷ ಪ್ಯಾಕೇಜ್ ಯೋಜನೆ | 1431 | 2403 | 30000.00 |
| | | 03 ವರ್ಷಗಳ ವಿಶೇಷ ಪ್ಯಾಕೇಜ್ ಯೋಜನೆ | 91 ಶಾಲೆಗಳು | ಕೆ.ಪಿ.ಎಸ್ | 15000.00 |
| 2) | **2020–21** | ರಾಜ್ಯ ಬಂಡವಾಳ ವೆಚ್ಚ | 1021 | 1610 | 11000.00 |
| | | ಆರ್.ಎಂ.ಎಸ್.ಎ ಬಾಕಿ ಕಾಮಗಾರಿ | 79 | 790 | 10792.75 |

| | | |
|---|---|---|
| | | 2020-21ನೇ ಸಾಲಿಗೆ ಸಾರ್ವಜನಿಕ ಶಿಕ್ಷಣ ಇಲಾಖೆಯ ರಾಜ್ಯವಲಯದ ಮುಂದುವರೆದ ಯೋಜನೆ ಕಾರ್ಯಕ್ರಮದಡಿಯಲ್ಲಿ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಶಾಲಾ ಕಟ್ಟಡಗಳ ನಿರ್ವಹಣೆಯಡಿ ಮಹಾತ್ಮ ಗಾಂಧಿ ನರೇಗಾ ಯೋಜನೆಯಡಿಯಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆ ಅನುದಾನವನ್ನು ಒಗ್ಗೂಡಿಸುವಿಕೆಯ (Convergence) ಮೂಲಕ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳಿಗೆ ಶಾಲಾ ಶೌಚಾಲಯ, ಆಟದ ಮೈದಾನ, ಶಾಲಾ ಕಾಂಪೌಂಡ್ ನಿರ್ಮಾಣ, ಬಿಸಿಯೂಟದ ಅಡಿಗೆ ಕೋಣೆ ನಿರ್ಮಾಣ ಮತ್ತು ಪೌಷ್ಟಿಕ ತೋಟ ಅಭಿವೃದ್ಧಿ ಚಟುವಟಿಕೆಗಳ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲು ರೂ.2921.00 ಲಕ್ಷಗಳನ್ನು ರಾಜ್ಯದ 34 ಜಿಲ್ಲೆಗಳಿಗೆ ಬಿಡುಗಡೆ ಮಾಡಲಾಗಿದೆ.<br>2020-21ನೇ ಸಾಲಿನಲ್ಲಿ ಎಲ್ಲಾ ಪ್ರಾಥಮಿಕ ಮತ್ತು ಪ್ರೌಢಶಾಲೆಗಳಲ್ಲಿ ಕುಡಿಯುವ ನೀರು ಒದಗಿಸಲು ಮತ್ತು ಶೌಚಾಲಯಗಳ ನಿರ್ವಹಣೆಗಾಗಿ ರೂ.3000.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ.<br>ಒಟ್ಟಾರೆ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆಗೆ ಒದಗಿಸುವ ಅನುದಾನದ ಲಭ್ಯತೆ ಮತ್ತು ಅಗತ್ಯತೆಗೆ ಅನುಗುಣವಾಗಿ ಹಂತಹಂತವಾಗಿ ಮೂಲಸೌಲಭ್ಯಗಳನ್ನು ಒದಗಿಸಲು ಕ್ರಮ ಕೈಗೊಳ್ಳಲಾಗಿದೆ. |

**ಇಪಿ 50 ಯೋಸಕ 2021**

(ಎಸ್.ಸುರೇಶ್ ಕುಮಾರ್)

ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು

# ಅನುಬಂಧ-1

| Sl No | District | LPS | HPS | HS | Total |
|---|---|---|---|---|---|
| 1 | Bagalkote | 459 | 840 | 186 | 1485 |
| 2 | Bellary | 633 | 974 | 230 | 1837 |
| 3 | Chikkodi | 717 | 1072 | 182 | 1971 |
| 4 | Belgavi | 543 | 844 | 130 | 1517 |
| 5 | Bangalore rural | 640 | 435 | 63 | 1138 |
| 6 | Bangalore North | 223 | 263 | 57 | 543 |
| 7 | Bangalore south | 399 | 464 | 86 | 949 |
| 8 | Bidar | 506 | 737 | 166 | 1409 |
| 9 | Chamarajanagar | 334 | 410 | 86 | 830 |
| 10 | Chikkaballapura | 910 | 525 | 111 | 1546 |
| 11 | Chikkamagalore | 669 | 658 | 116 | 1443 |
| 12 | Chitradurga | 806 | 835 | 114 | 1755 |
| 13 | Dakshina kannada | 244 | 671 | 170 | 1085 |
| 14 | Davanagere | 494 | 583 | 133 | 1210 |
| 15 | Dharwad | 217 | 546 | 108 | 871 |
| 16 | Gadag | 182 | 432 | 113 | 727 |
| 17 | Hassan | 1258 | 970 | 241 | 2469 |
| 18 | Haveri | 451 | 709 | 141 | 1301 |
| 19 | Kalburgi | 771 | 994 | 293 | 2058 |
| 20 | Kodagu | 121 | 256 | 47 | 424 |
| 21 | Kolar | 1175 | 627 | 126 | 1928 |
| 22 | Koppala | 382 | 576 | 161 | 1119 |
| 23 | Mandya | 775 | 821 | 214 | 1810 |
| 24 | Mysore | 935 | 955 | 232 | 2122 |
| 25 | Raichur | 667 | 789 | 219 | 1675 |
| 26 | Ramnagara | 786 | 451 | 107 | 1344 |
| 27 | Shimogga | 903 | 935 | 164 | 2002 |
| 28 | Madhugiri | 729 | 528 | 95 | 1352 |
| 29 | Tumkur | 1261 | 746 | 132 | 2139 |
| 30 | Udupi | 222 | 363 | 106 | 691 |
| 31 | Sirsi | 610 | 506 | 74 | 1190 |
| 32 | Uttara kannada | 455 | 480 | 49 | 984 |
| 33 | Vijayapura | 821 | 1034 | 153 | 2008 |
| 34 | Yadagiri | 453 | 470 | 122 | 1045 |
| Total | | 20751 | 22499 | 4727 | 47977 |

ಆಧಾರ ಸ್ಯಾಟ್ಸ್ 2020-21

10/03/

ಉಪ ನಿರ್ದೇಶಕರು (ಶಾಲಾ ಶಿಕ್ಷಣ)
ಆಯುಕ್ತರ ಕಚೇರಿ
ಸಾರ್ವಜನಿಕ ಶಿಕ್ಷಣ ಇಲಾಖೆ
ಬೆಂಗಳೂರು - 01